




**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ನೀವು ಕಂಡಿರಾ ಪರಲೋಕದ ಕರ್ಮಫಲಗಳನ್ನು ನಿರಾಕರಿಸುವವನನ್ನು?

أَرَءَيْتَ الَّذِىْ يُكَذِّبُ بِالدِّيْنِ ①

2. ಅವನೇ ತಾನೆ, ಅನಾಥನನ್ನು ದೂರ ದಬ್ಬುವವನು-

فَذٰلِكَ الَّذِىْ يَدُعُّ الْيَتِيْمَ ②

3. ಮತ್ತು ದರಿದ್ರನಿಗೆ ಊಟ ಕೊಡಲು ಪ್ರೇರೇಪಿಸದವನು![1]

وَلَا يَحُضُّ عَلٰى طَعَامِ الْمِسْكِيْنِ ③

4. ಮತ್ತು ವಿನಾಶ ಕಾದಿದೆ ಆ ನಮಾಝ್ ನಿರ್ವಹಿಸುವವರಿಗೆ-

فَوَيْلٌ لِّلْمُصَلِّيْنَ ④

5. ಅವರು ತಮ್ಮ ನಮಾಝಿನ ಬಗ್ಗೆ ಅನಾಸ್ಥೆ ತೋರುತ್ತಾರೆ,[2]

الَّذِيْنَ هُمْ عَنْ صَلَاتِهِمْ سَاهُوْنَ ⑤

6. ಅವರು ತೋರಿಕೆಯ ಕೆಲಸ ಮಾಡುತ್ತಾರೆ-

الَّذِيْنَ هُمْ يُرَآءُوْنَ ⑥

7. ಮತ್ತು (ಜನರಿಗೆ) ಸಾಮಾನ್ಯ ಅವಶ್ಯಕ ವಸ್ತುಗಳನ್ನು ಕೊಡುವುದಕ್ಕೂ ಹಿಂಜರಿಯುತ್ತಾರೆ.

وَيَمْنَعُوْنَ الْمَاعُوْنَ ⑦

---

1. ಅರ್ಥಾತ್- ಸ್ವತಃ ಈ ಕೆಲಸಕ್ಕೆ ಮುಂದಾಗುವುದಿಲ್ಲ. ದರಿದ್ರರಿಗೆ ಉಣಬಡಿಸುವಂತೆ ಅವನು ತನ್ನ ಮನೆಯವರಿಗೂ ಹೇಳುವುದಿಲ್ಲ. ಹಾಗೆಯೇ ಜನರನ್ನೂ ದರಿದ್ರರಿಗೆ ನೆರವಾಗುವಂತೆ ಪ್ರೇರೇಪಿಸುವುದಿಲ್ಲ.
2. ಅರ್ಥಾತ್- ನಮಾಝ್‌ನಲ್ಲಿ ಮರೆಯುವುದಲ್ಲ ಬದಲಾಗಿ ನಮಾಝ್‌ನ ಬಗ್ಗೆ ಅಶ್ರದ್ಧನಾಗುವುದು.